# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ | : | 436(521) |
| ಸದಸ್ಯರ ಹೆಸರು | : | ಶ್ರೀ ರಘುನಾಥ್ ರಾವ್ ಮಲ್ಕಾಪುರೆ(ವಿಧಾನ ಸಭೆಯಿಂದ ಚುನಾಯಿತರಾದವರು) |
| ಉತ್ತರಿಸುವ ದಿನಾಂಕ | : | 09/03/2020. |
| ಉತ್ತರಿಸುವ ಸಚಿವರು | : | ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು. |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕಳೆದ 3 ವರ್ಷಗಳಲ್ಲಿ ಕಲ್ಯಾಣ ಕರ್ನಾಟಕ ಪ್ರದೇಶದ ವ್ಯಾಪ್ತಿಯ ಜಿಲ್ಲೆಗಳಲ್ಲಿ ಎಸ್.ಎಸ್.ಎಲ್.ಸಿ ಪರೀಕ್ಷೆಗಳ ಫಲಿತಾಂಶದಲ್ಲಿ ಬಂದಿರುವ ಶೇಕಡವಾರು ಪ್ರಮಾಣವೆಷ್ಟು; | ಎಸ್.ಎಸ್.ಎಲ್.ಸಿ ಫಲಿತಾಂಶದ ಶೇಕಡವಾರು ಪ್ರಮಾಣದ ಮಾಹಿತಿ ಈ ಕೆಳಕಂಡಂತಿದೆ. (ಕೆಳಗಿನ ಕೋಷ್ಟಕ ನೋಡಿ) |

| ಕ್ರ.ಸ | ಜಿಲ್ಲೆ ಹೆಸರು | 2017 | 2018 | 2019 | ಮೂರು ವರ್ಷಗಳ ಸರಾಸರಿ |
|---|---|---|---|---|---|
| 1 | ಬಳ್ಳಾರಿ | 74.73 | 83.31 | 78.73 | 78.92 |
| 2 | ಬೀದರ್ | 62.31 | 61.44 | 75.59 | 66.45 |
| 3 | ಕಲಬುರಗಿ | 70.29 | 69.41 | 75.34 | 71.68 |
| 4 | ಕೊಪ್ಪಳ | 76.09 | 81.23 | 81.47 | 79.59 |
| 5 | ರಾಯಚೂರು | 69.69 | 69.84 | 66.39 | 68.64 |
| 6 | ಯಾದಗಿರಿ | 74.86 | 37.13 | 55.09 | 55.69 |
| | ಕಲಬುರಗಿ ವಿಭಾಗ | **70.88** | **69.78** | **73.70** | **70.16** |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಆ) | ರಾಜ್ಯದ ಇತರೆ ಜಿಲ್ಲೆಗಳಿಗೆ ಹೋಲಿಸಿದ್ದಲ್ಲಿ ಈ ಭಾಗದಲ್ಲಿ ಅತ್ಯಂತ ಕಡಿಮೆ ಶೇಕಡವಾರು ಫಲಿತಾಂಶಗಳು ಬರುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಹಾಗಿದ್ದಲ್ಲಿ, ಇದಕ್ಕೆ ಕಾರಣಗಳೇನು; | ಬಂದಿದೆ.<br>ಈ ಹಿಂದಿನಿಂದಲೂ ಈ ಭಾಗದಲ್ಲಿ ಫಲಿತಾಂಶವು ಕಡಿಮೆ ಪ್ರಮಾಣದಲ್ಲಿದ್ದು, ಸದರಿ ಭಾಗದಲ್ಲಿನ ಜನರಲ್ಲಿರುವ ಸಾಕ್ಷರತೆಯ ಕೊರತೆ, ಮಕ್ಕಳು ವ್ಯಾಸಂಗದ ಮಧ್ಯದಲ್ಲಿಯೇ ಶಾಲೆಯನ್ನು ತೊರೆಯುವುದು(Drop Out) ಹಾಗೂ ಶಿಕ್ಷಕರ ಕೊರತೆ ಮತ್ತು ಈ ಭಾಗದಲ್ಲಿ ಶಿಕ್ಷಕರು ಕಾರ್ಯ ನಿರ್ವಹಿಸಲು ಆಸಕ್ತಿ ತೋರಿಸದೆ ಇರುವು , ಅತಿಥಿ ಶಿಕ್ಷಕರಲ್ಲಿ ಇರುವ ಬೋಧನಾನುಭವದ ಕೊರತೆ, ಋತುಮಾನಕ್ಕೆ ಅನುಗುಣವಾಗಿ ವಲಸೆ ಹೋಗುವ ಪರಿಪಾಠ ಬೆಳೆಸಿಕೊಂಡಿರುವುದರಿಂದ, ಮಕ್ಕಳು ನಿಯಮಿತವಾಗಿ ತರಗತಿಗಳಿಗೆ ಹಾಜರಾಗದಿರುವುದು ಕಡಿಮೆ ಫಲಿತಾಂಶ ಬರಲು ಕಾರಣಗಳಾಗಿರುತ್ತವೆ. |
| ಇ) | ಮುಂಬರುವ ಪರೀಕ್ಷೆಗಳಲ್ಲಿ ಈ ಭಾಗದಲ್ಲಿ ಉತ್ತಮ ಫಲಿತಾಂಶ ಬರುವಂತಾಗಲು ಸರ್ಕಾರ ಕೈಗೊಳ್ಳಲಿರುವ ಕ್ರಮಗಳೇನು? (ಮಾಹಿತಿ ನೀಡುವುದು) | • ಖಾಲಿ ಹುದ್ದೆಗಳಿಗೆ ಎದುರಾಗಿ ಅತಿಥಿ ಶಿಕ್ಷಕರನ್ನು ನೇಮಕಾತಿ ಮಾಡಿಕೊಳ್ಳುವ ಮೂಲಕ ಶಿಕ್ಷಕರ ಕೊರತೆಯನ್ನು ಸರಿದೂಗಿಸಲಾಗಿದೆ.<br>• ವಿಷಯ ಶಿಕ್ಷಕರ ವೇದಿಕೆಗಳ ರಚನೆಯನ್ನು ಹಾಗೂ ಶಿಕ್ಷಕರಿಗೆ ಜಿಲ್ಲಾ ಮಟ್ಟದಲ್ಲಿ ಹಾಗೂ ತಾಲ್ಲೂಕು ಮಟ್ಟದಲ್ಲಿ ವಿಷಯಾಧಾರಿತ ಕಾರ್ಯಾಗಾರಗಳನ್ನು ಏರ್ಪಡಿಸಿ ಬೋಧನಾನುಭವನ್ನು ಉತ್ತಮಪಡಿಸಲು ಕ್ರಮ ಕೈಗೊಂಡಿದೆ.<br>• ಜಿಲ್ಲಾ ಮಟ್ಟದಲ್ಲಿ ಫೋನ್- ಇನ್ ಕಾರ್ಯಕ್ರಮದ |

ಮೂಲಕ ಶಿಕ್ಷಕರಿಂದ ಮಗು ಹಾಗೂ ಪಾಲಕರಲ್ಲಿ ಜಾಗೃತಿ ಮೂಡಿಸಲಾಗುತ್ತಿದೆ.

- ಕಡಿಮೆ ಅಂಕಗಳನ್ನು ಪಡೆಯಬಹುದಾದ ಮಕ್ಕಳನ್ನು ಗುರುತಿಸಿ ಅವರಿಗಾಗಿಯೇ ಶಿಬಿರಗಳನ್ನು ನಡೆಸಲಾಗುತ್ತಿದೆ.
- ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 17 ಸೇನೌವ 2015, ದಿನಾಂಕ: 27.04.2015ರ ಕ್ರಮ ಸಂಖ್ಯೆ:8(ಅ) ರನ್ವಯ ಹೈದ್ರಾಬಾದ-ಕರ್ನಾಟಕ ಪ್ರದೇಶದಲ್ಲಿ ನೆಲೆಸಿರುವ ಕಛೇರಿಗಳಿಗೆ ಸ್ಥಳೀಯ ವೃಂದ ಮತ್ತು ಮಿಕ್ಕುಳಿದ ವೃಂದಗಳಲ್ಲಿನ ವಿವಿಧ ವೃಂದದ ಹುದ್ದೆಗಳಲ್ಲಿ ಖಾಲಿ ಇರುವ ಹುದ್ದೆಗಳಿಗೆದುರಾಗಿ ನೇಮಕಾತಿ ಹೊಂದಿರುವ ನೌಕರರನ್ನು, ಅವರ ನೇಮಕಾತಿ ದಿನಾಂಕದಿಂದ ಕನಿಷ್ಠ 10 ವರ್ಷಗಳವರೆಗೆ ಹೈದ್ರಾಬಾದ್-ಕರ್ನಾಟಕ ಪ್ರದೇಶ ಹೊರತುಪಡಿಸಿ ವರ್ಗಾವಣೆ ಮಾಡದಿರಲು ಕ್ರಮ ಕೈಗೊಂಡಿದೆ.
- ಕಲ್ಯಾಣ ಕರ್ನಾಟಕ ಭಾಗದ 06 ಜಿಲ್ಲೆಗಳ ಒಟ್ಟು 520 ಸರ್ಕಾರಿ ಶಾಲೆಗಳಲ್ಲಿ ಎಸ್.ಎಸ್.ಎಲ್.ಸಿ ಪರೀಕ್ಷೆಯ ಸರಾಸರಿ ಶೇ 75% ಕ್ಕಿಂತ ಕಡಿಮೆ ಫಲಿತಾಂಶ ಹೊಂದಿರುವ ಸರ್ಕಾರಿ ಪ್ರೌಢಶಾಲೆಗಳಲ್ಲಿ ಫಲಿತಾಂಶ ಸುಧಾರಣೆಗಾಗಿ ಗಣಿತ, ವಿಜ್ಞಾನ ಮತ್ತು ಇಂಗ್ಲಿಷ್ ವಿಷಯಗಳಿಗೆ ಬೆಳಿಗ್ಗೆ 8.45 ರಿಂದ 9.45 ರವರೆಗೆ ಮತ್ತು ಸಾಯಂಕಾಲ 4.45 ರಿಂದ 5.45 ರವರೆಗೆ ತೀವ್ರ ನಿಗಾ ಕಲಿಕಾ ತರಗತಿಗಳು ನಡೆಸಲಾಗುತ್ತಿದೆ.
- ರೆಡ್ ಝೋನ್ ನಲ್ಲಿ ಇರುವಂತಹ ಮಕ್ಕಳನ್ನು ಗ್ರೀನ್ ಝೋನ್ ಗೆ ತರಲು ಪ್ರಯತ್ನಿಸಲಾಗುತ್ತಿದೆ ಹಾಗೂ ರಾಜ್ಯ ಫಲಿತಾಂಶಕ್ಕಿಂತ ಹೆಚ್ಚುವರಿ ಫಲಿತಾಂಶ ಪಡೆದ ಶಾಲೆಗಳಿಗೆ ಶಾಲೆಯ ಚಟುವಟಿಕೆಗಳನ್ನು, ಕಲಿಕೆಯ ಉಪಕರಣಗಳನ್ನು ಖರೀದಿಸಲು ಅಥವಾ ಮಕ್ಕಳ ಕಲಿಕೆಯ ಪ್ರೋತ್ಸಾಹ ನೀಡುವಲ್ಲಿ ಸಹಕಾರಿಯಾಗಬಹುದಾದ ಕಂಪ್ಯೂಟರ್, ಗಣಿತ ಕಿಟ್- ಗಳು, ವಿಜ್ಞಾನ ಕಿಟ್ ಗಳಂತಹ ಉಪಕರಣಗಳನ್ನು ಖರೀದಿಸಲು ನಿಗದಿಪಡಿಸಿ ಅನುದಾನ ಒದಗಿಸುವ ಕ್ರಮದೊಂದಿಗೆ ಉತ್ತಮ ಫಲಿತಾಂಶ ಬರಲು ಕ್ರಮ ಕೈಗೊಂಡಿದೆ.

ಇಪಿ 70 ಎಸ್ಇಎಸ್ 2020

**(ಎಸ್. ಸುರೇಶ್ ಕುಮಾರ್)**

ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ
ಹಾಗೂ ಸಕಾಲ ಸಚಿವರು.